# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1399 |
| 2 | ಸದಸ್ಯರ ಹೆಸರು | ಶ್ರೀ ಕೆ.ವಿ.ನಾರಾಯಣಸ್ವಾಮಿ (ವಿಧಾನಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸಬೇಕಾದ ದಿನಾಂಕ | 09.03.2022 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಡವರಿಗೆ ಸರ್ಕಾರದಿಂದ ಮಂಜೂರಾಗಿರುವ ಜಮೀನು ಹಲವು ವರ್ಷಗಳಿಂದ ಪೋಡಿಯಾಗದೆ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಸರ್ಕಾರದಿಂದ ಬಡವರಿಗೆ ಮಂಜೂರಾದ ಭೂಮಿಗೆ ಪೋಡಿ ಮಾಡಲು ಮಂಜೂರಾತಿ ಪಡೆದವರು ಸಲ್ಲಿಸಬೇಕಾದ ದಾಖಲಾತಿಗಳು ಯಾವುವು; | ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 74 ಭೂದಾಸ 2002 ದಿನಾಂಕ 30-10-2002ರನ್ವಯ ಮಂಜೂರಾದ ಭೂಮಿಯನ್ನು ಪೋಡಿ ಮಾಡಲು ಈ ಕೆಳಕಂಡ ದಾಖಲೆಗಳನ್ನು ಸಲ್ಲಿಸಬೇಕಾಗಿರುತ್ತದೆ.<br>1) ಭೂಮಂಜೂರಾತಿ ಆದೇಶ.<br>2) ಸಾಗುವಳಿ ಚೀಟಿ/ಹಕ್ಕುಪತ್ರ.<br>3) ಅನುಮೋದಿತ ರೆವಿನ್ಯೂ ನಕ್ಷೆ.<br>ಮೇಲ್ಕಂಡ ದಾಖಲೆಗಳನ್ನು ಸಂಬಂಧಿಸಿದ ತಹಶೀಲ್ದಾರರು ಪರಿಶೀಲಿಸಿ ಮತ್ತು ದೃಢೀಕರಿಸಿ, ಮಂಜೂರಾತಿಯ ನೈಜತೆಯನ್ನು ಖಾತರಿ ಪಡಿಸಿಕೊಂಡು ಪೋಡಿ ಮಾಡುವ ಕುರಿತು ನಿಯಮಾನುಸಾರ ಕಡತವನ್ನು ಭೂಮಾಪನ ಶಾಖೆಗೆ ಸಲ್ಲಿಸಿದಲ್ಲಿ ಪೋಡಿ ದುರಸ್ತಿಗೆ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಹಲವು ದಾಖಲಾತಿಗಳನ್ನು ಕೇಳಿ ಬಡವರ ಜಮೀನು ಪೋಡಿ ಮಾಡದೆ ಕಛೇರಿಗೆ ಅಲೆಯುವಂತೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಈ) | ದಾಖಲೆಗಳನ್ನು ನಿರ್ವಹಿಸುವ ಮತ್ತು ಸಂರಕ್ಷಿಸುವ ಕಂದಾಯ ಇಲಾಖೆಯ ಬಳಿಯೇ ದಾಖಲೆಗಳು ಇಲ್ಲದ ಸಂದರ್ಭದಲ್ಲಿ ಬಡವರು ದಾಖಲೆಗಳನ್ನು ಒದಗಿಸಿ ಪೋಡಿ ಮಾಡಿಸುವುದು ಸಾಧ್ಯವೇ; | ಮಂಜೂರಿಯಂತೆ ಪೋಡಿ ದುರಸ್ತಿ ಕುರಿತು ಅರ್ಜಿದಾರರು ತಹಶೀಲ್ದಾರರ ಮುಖಾಂತರ ಅಥವಾ ತಹಶೀಲ್ದಾರ ಕಛೇರಿಯಿಂದ ಪ್ರಸ್ತಾವನೆ ಸ್ವೀಕೃತವಾದಲ್ಲಿ ಪೋಡಿ ದುರಸ್ತಿ ಮಾಡಲು ಅಗತ್ಯವಾಗಿರುವ ದಾಖಲೆಗಳಲ್ಲಿ ಯಾವುದಾದರೂ ದಾಖಲೆಗಳು ಶಿಥಿಲವಾಗಿದ್ದಲ್ಲಿ/ ಲಭ್ಯವಿಲ್ಲದಿದ್ದಲ್ಲಿ ಅಂತಹ ಪ್ರಕರಣವನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಗೈರು ವಿಲೇ ಕಡತ ಸಮಿತಿಯು ನಿಯಮಾನುಸಾರ ಪರಿಶೀಲಿಸಿ, ಲಭ್ಯವಿರುವ ದಾಖಲೆಗಳ ಆಧಾರದಲ್ಲಿ ಮಂಜೂರಿ ನೈಜತೆಯನ್ನು ಖಾತರಿಪಡಿಸಿಕೊಂಡು, ಪೋಡಿ ದುರಸ್ತಿ ಪಡಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ ಆರ್.ಡಿ. 74 ಎಲ್.ಜಿ.ಪಿ 2009 ದಿನಾಂಕ 17-9-2009 ಮತ್ತು ಸಂಖ್ಯೆ ಕಂಇ 8 ಎಲ್‌ಜಿಪಿ 2016 ದಿನಾಂಕ: 20-06-2016 ಹಾಗೂ ದಿನಾಂಕ: 18-07-2016 ರಲ್ಲಿ ಅಗತ್ಯ ಸೂಚನೆ ಮತ್ತು ಮಾರ್ಗಸೂಚಿಗಳನ್ನು ನೀಡಲಾಗಿದ್ದು, ಅದರಂತೆ ಪೋಡಿ ಮಾಡಲು ಕ್ರಮ ವಹಿಸಲಾಗುತ್ತಿದೆ. |
| ಉ) | ಯಾವ ಕಾಲಮಿತಿಯಲ್ಲಿ ಸರ್ಕಾರದಿಂದ ಭೂ ಮಂಜೂರಾತಿಯಾಗಿರುವ ಜಮೀನುಗಳಿಗೆ ಪೋಡಿ ಮಾಡಲು ಕ್ರಮವಹಿಸಲಾಗುವುದು? | |

**ಸಂಖ್ಯೆ: ಕಂಇ 60 ಎಸ್‌ಎಸ್‌ಸಿ 2022**

(ಆರ್.ಅಶೋಕ)
ಕಂದಾಯ ಸಚಿವರು